# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ – I | ಬೆಂಗಳೂರು, ಬುಧವಾರ, ಏಪ್ರಿಲ್ ೨೩, ೨೦೧೪ (ವೈಶಾಖ ೩, ಶಕ ವರ್ಷ ೧೯೩೬) | ನಂ. ೨೭೪ |
|---|---|---|
| Part – I | Bangalore, Wednesday, April 23, 2014 (Vaishakha 3, Shaka Varsha 1936) | No. 274 |



**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ಪ್ರಕಟಣೆ**

**ಸಂಖ್ಯೆ. ಲೋಇ 66 ಇಎಪಿ 2014, ಬೆಂಗಳೂರು, ದಿನಾಂಕ: 22–04–2014**

**ವಿಷಯ:** ರಾಯಚೂರು – ಬಾಚಿ ರಾಜ್ಯ ಹೆದ್ದಾರಿ–20 ರ ಕಿಮೀ 277.68 ರಿಂದ 339.53 ವರೆಗೆ ಒಟ್ಟು 61.85 ಕಿಮೀ ಉದ್ದದ ರಸ್ತೆಗೆ ಕರ್ನಾಟಕ ಹೆದ್ದಾರಿ ಕಾಯ್ದೆ, 1964 ನಿಯಮ 4ರ ಅಡಿಯಲ್ಲಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆರವರನ್ನು ಹೆದ್ದಾರಿ ಪ್ರಾಧಿಕಾರಿಯೆಂದು (ಹೈವೇ ಅಥಾರಿಟಿ) ನೇಮಿಸುವ ಬಗ್ಗೆ.

**ಉಲ್ಲೇಖ:** ಕರ್ನಾಟಕ ರಾಜ್ಯ ಪತ್ರದ ಪ್ರಕಟಣೆ ಸಂಖ್ಯೆ: ಲೋಇ 23 ಆರ್‌ಡಿಎಫ್ 2004 ದಿನಾಂಕ: 22–09–2008.

ಉಲ್ಲೇಖಿತ ದಿನಾಂಕ 22–09–2008ರ ಕರ್ನಾಟಕ ರಾಜ್ಯ ಪತ್ರದಲ್ಲಿನ ಪ್ರಕಟಣೆಯಲ್ಲಿ ದಿನಾಂಕ 24–11–2007 ರಂದು ಹೊರಡಿಸಲಾಗಿದ್ದ ಪ್ರಕಟಣೆಯನ್ನು ಭಾಗಶ: ಮಾರ್ಪಡಿಸಿ ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆಯ ರಾಜ್ಯ ಹೆದ್ದಾರಿಗಳು (ರಾಜ್ಯ ಹೆದ್ದಾರಿ (ವಿಶೇಷ) ಹೊರತುಪಡಿಸಿ) ಮತ್ತು ಜಿಲ್ಲಾ ಮುಖ್ಯ ರಸ್ತೆಗಳಿಗೆ ಅನ್ವಯವಾಗುವಂತೆ ಇಲಾಖೆಯ ಆಯಾ ವಿಭಾಗಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು / ರಸ್ತೆ ಭಾಗಗಳಿಗೆ ಆಯಾ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರನ್ನು ಹೆದ್ದಾರಿ ಪ್ರಾಧಿಕಾರಿಯೆಂದು ಪುನರ್ ನೇಮಿಸಲಾಗಿದೆ. ಈ ಪ್ರಕಟಣೆಯು ಕರ್ನಾಟಕ ಹೆದ್ದಾರಿ ಕಾಯ್ದೆ ಪ್ರಕರಣ 4ಕ್ಕೆ ಸಂಬಂಧಿಸಿದಂತೆ ಈ ಹಿಂದೆ ಹೊರಡಿಸಲಾಗಿದ್ದ ಎಲ್ಲಾ ಪ್ರಕಟಣೆಗಳನ್ನು ಅತಿಕ್ರಮಿಸಿರುತ್ತದೆ. (Supersedes)

ಮುಂದುವರೆದು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯ ಹಂತ–2ರ ವಿಶ್ವಬ್ಯಾಂಕ್ ನೆರವಿನಿಂದ ರಾಜ್ಯ ಹೆದ್ದಾರಿ ಭಾಗಗಳಲ್ಲಿ Safe Corridor Demonstration Programme (SCDP) ಅಡಿಯಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲು ಯೋಜಿಸಿದ್ದು, ಈ ಸಂಬಂಧ ರಾಯಚೂರು – ಬಾಚಿ ರಾಜ್ಯ ಹೆದ್ದಾರಿ–20 ರ ಕಿಮೀ 277.68 ರಿಂದ 339.53 ವರೆಗೆ ಒಟ್ಟು 61.85 ಕಿಮೀ ಉದ್ದದ ರಸ್ತೆಗೆ ಕರ್ನಾಟಕ ಹೆದ್ದಾರಿ ಅಧಿನಿಯಮ 1964 ರ ಪ್ರಕರಣ–4 ರಡಿ ತಾತ್ಕಲಿಕವಾಗಿ "ಹೆದ್ದಾರಿ ಪ್ರಾಧಿಕಾರಿಯೆಂದು (ಹೈವೇ ಅಥಾರಿಟಿ)" ಎಂದು ಸದರಿ ಕಾಮಗಾರಿಗಳು ಪೂರ್ಣಗೊಂಡು ಸಂಬಂಧಪಟ್ಟ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ಗಳಿಗೆ ಮರು ಹಸ್ತಾಂತರವಾಗುವವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇಂ. ವಿಜಯ್. ಭೀ. ಚಂದಾಪುರ**
ಸರ್ಕಾರದ ಅಧೀನ ಕಾರ್ಯದರ್ಶಿ
ಬಾಹ್ಯ ಅನುದಾನಿತ ಯೋಜನೆಗಳು (EAP)
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲ ಸಾರಿಗೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ - I | ಬೆಂಗಳೂರು, ಮಂಗಳವಾರ, ಏಪ್ರಿಲ್ ೨೯, ೨೦೧೪ (ವೈಶಾಖ ೯, ಶಕ ವರ್ಷ ೧೯೩೬) | ನಂ. ೨೮೪ |
|---|---|---|
| Part - I | Bangalore, Tuesday, April 29, 2014 (Vaishakha 9, Shaka Varsha 1936) | No. 284 |

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಔಷಧ ನಿಯಂತ್ರಣ ಇಲಾಖೆಯ ಪರೀಕ್ಷಾ ಪ್ರಾಧಿಕಾರ ಮಂಡಳಿಯು ನಡೆಸುವ ಡಿ-ಫಾರ್ಮ ಪ್ರವೇಶ/ಪರೀಕ್ಷೆಗಳ ಶುಲ್ಕ ಹಾಗೂ ಸಂಭಾವನೆಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ.**
1. ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಔನಿಇ/859/ಸಿಬ್ಬಂದಿ/2011-12, ದಿನಾಂಕ: 20.10.2012.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 144 ಪಿಟಿಡಿ 2006, ದಿನಾಂಕ: 11.08.2006.

**ಪ್ರಸ್ತಾವನೆ,**

ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಔಷಧ ನಿಯಂತ್ರಣ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುವ ಪರೀಕ್ಷಾ ಪ್ರಾಧಿಕಾರ ಮಂಡಳಿಯು ನಡೆಸುವ ಡಿ.ಫಾರ್ಮ ಪ್ರವೇಶ/ಪರೀಕ್ಷೆಗಳ ಶುಲ್ಕ ಹಾಗೂ ಸಂಭಾವನೆಗಳನ್ನು ನಿಗಧಿಪಡಿಸಿ ಈಗಾಗಲೇ 05 ವರ್ಷಗಳಿಗಿಂತ ಹೆಚ್ಚಿನ ಅವಧಿ ಕಳೆದಿರುವುದರಿಂದ ಡಿ-ಫಾರ್ಮ ಪ್ರವೇಶ ಹಾಗೂ ಪರೀಕ್ಷೆಗಳಿಗೆ ನೀಡುತ್ತಿರುವ ವಿವಿಧ ಸಂಭಾವನೆಗಳನ್ನು ಮತ್ತು ಶುಲ್ಕಗಳನ್ನು ಪರಿಷ್ಕರಿಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ:(2)ರಲ್ಲಿನ ಸರ್ಕಾರದ ಆದೇಶದಲ್ಲಿ ಪರೀಕ್ಷಾ ಪ್ರಾಧಿಕಾರ ಮಂಡಳಿಯು ನಡೆಸುತ್ತಿರುವ ಡಿ-ಫಾರ್ಮ ಪ್ರವೇಶ/ಪರೀಕ್ಷೆಗಳಿಗೆ ಸಂಬಂಧಿಸಿದಂತೆ ನೀಡಲಾಗುವ ಸಂಭಾವನೆಗಳು ಹಾಗೂ ವಿವಿಧ ಸೇವೆಗಳಿಗೆ ವಿಧಿಸುವ ಶುಲ್ಕಗಳನ್ನು ನಿಗದಿಪಡಿಸಲಾಗಿರುತ್ತದೆ ಹಾಗೂ ಸದರಿ ಆದೇಶದಲ್ಲಿ ನಿಗದಿಪಡಿಸಿರುವ ಸಂಭಾವನೆ ಹಾಗೂ ಶುಲ್ಕಗಳ ರೀತ್ಯಾ ಪ್ರಸ್ತುತ ಪಾವತಿ ಮಾಡಲಾಗುತ್ತಿದೆ.

ಇತ್ತೀಚಿನ ವರ್ಷಗಳಲ್ಲಿ ಉಂಟಾಗಿರುವ ಬೆಲೆ ಏರಿಕೆ ಹಾಗೂ ವಿವಿಧ ಪರೀಕ್ಷಾ ಮಂಡಳಿಗಳು, ವಿಶ್ವವಿದ್ಯಾಲಯಗಳು, ಪರೀಕ್ಷಾ ಶುಲ್ಕಗಳನ್ನು ಹಾಗೂ ಸಂಭಾವನೆಗಳನ್ನು ಪರಿಷ್ಕರಿಸಿರುವ ಹಿನ್ನೆಲೆಯಲ್ಲಿ ಪರೀಕ್ಷಾ ಪ್ರಾಧಿಕಾರ ಮಂಡಳಿಯು ನಡೆಸುವ ಡಿ-ಫಾರ್ಮ ಪ್ರವೇಶ/ಪರೀಕ್ಷೆಗಳ ವಿವಿಧ ಸೇವೆಗಳಿಗೆ ವಿಧಿಸುತ್ತಿರುವ ಶುಲ್ಕಗಳನ್ನು ಹಾಗೂ ನೀಡುತ್ತಿರುವ ವಿವಿಧ ಸಂಭಾವನೆಗಳನ್ನು ಹೆಚ್ಚಿಸಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 361 ಪಿಟಿಡಿ 2012, ದಿನಾಂಕ: 29.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಔಷಧ ನಿಯಂತ್ರಣ ಇಲಾಖೆಯ ಪರೀಕ್ಷಾ ಪ್ರಾಧಿಕಾರ ಮಂಡಳಿಯು ನಡೆಸುವ ಡಿ-ಫಾರ್ಮ ಪ್ರವೇಶ/ಪರೀಕ್ಷೆಗಳ ಶುಲ್ಕ ಹಾಗೂ ಸಂಭಾವನೆಗಳನ್ನು ಅನುಬಂಧ-1 ಮತ್ತು 2ರಲ್ಲಿ ನೀಡಿರುವಂತೆ 2014ನೇ ಸಾಲಿನಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪರಿಷ್ಕರಿಸಲಾಗಿದೆ.

1. ಪರಿಷ್ಕರಿಸಿದ ಪರೀಕ್ಷಾ ಶುಲ್ಕಗಳಿಂದ ಬಂದ ಹಣವನ್ನು ರಾಜ್ಯ ಸರ್ಕಾರದ ರಾಜ್ಯಸ್ವ ಲೆಕ್ಕಶೀರ್ಷಿಕೆಗೆ ಜಮಾ ಮಾಡತಕ್ಕದ್ದು.
2. ಸಂಭಾವನೆ ಪಾವತಿಸಲು ಹೆಚ್ಚುವರಿ ಅನುದಾನ ಕೋರದೇ ಒದಗಿಸಿರುವ ಅನುದಾನದಲ್ಲೇ ಅವಕಾಶ ಮಾಡಿಕೊಳ್ಳತಕ್ಕದ್ದು.
3. ಈ ಸಂಬಂಧದ ವೆಚ್ಚವನ್ನು ಲೆಕ್ಕಶೀರ್ಷಿಕೆ 2210-05-105-1-14-015 ಪೂರಕ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 67/ವೆಚ್ಚ-5/2014, ದಿನಾಂಕ: 10.03.2014ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಟಿ.ಎನ್. ನರಸಿಂಹರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
(ಭಾ.ವೈ.ಪ.ಮತ್ತು ಸಮನ್ವಯ)

**ANNEXURE-I**

**to G.O. No:HFW 361 PTD 2012. Dated:29.04.2014**
**PAYMENT OF REVISED REMUNERATION FOR THE STAFF ENGAGED FOR D. PHARM EXAMINATION**

| SL. NO. | ITEM OF WORK | EXISTING RATE OF REMUNERATION | REVISED RATE OF REMUNERATION |
|---|---|---|---|
| 1 | For setting of Theory Question Papers | 300 /- per question paper | Rs. 500 /- per question paper |
| 2 | Valuation/ reviewing of Theory Answer Book | 15/- per Answer Book Min. 150/- | Rs. 20/- per Answer Book Min. 200/- |
| 3 | For setting of Practical Question Paper, conduction practical Examination and Valuation of Answer Books (Including Viva-Voice) | 25/- Per student Minimum Rs. 250/- Separately of each Examiner for each subject | Rs. 30/- Per student Minimum Rs. 300/- Separately of each Examiner for each subject |
| 4 | **For staff engaged in Theory Exam Center.** | | |
| | 1. Chief Superintendent | 200/- per session | Rs. 250/- per session |
| | 2. Deputy Chief Superintendent | 150/- Per session | Rs. 200/- Per session |
| | 3. Observer | 100/- per session | Rs. 150/- per session |
| | 4. Invigilators @ 1 per Batch of 20 students and 01 Reliever for 04 invigilators | 80/- per session | Rs. 100/- per session |
| | 5. Gazetted Asst./Office Superintendent 1/1 | 60/- per Session | Rs. 75/- per Session |
| | 6. F.D.A./ Stenographer 2/1 | 40/- per session | Rs. 50/- per session |
| | 7. S.D.A./ Typist 2/1 | 40/- per session | Rs. 50/- per session |
| | 8. Attenders/Peons/ Water Boys -4 | 30/- per session | Rs. 40/- per session |
| 5 | **For staff engaged on Exam duties at Practical Exam Centres** | | |
| | 1. Chief Superintendent 1 | 200/- Per Day | Rs. 250/- Per Session |
| | 2. Gazetted Asst/ Superintendent 1/1 | 60/- per Session | Rs. 75/- per Session |
| | 3. F.D.A./ Stenographer 2/1 | 40/- per session | Rs. 50/- per session |
| | 4. S.D.A./ Typist 2/1 | 40/- per session | Rs. 50/- per session |
| | 5. Mechanic/Jr. Engineer 1 | 40/- per session | Rs. 50/- per session |
| | 6. Lab technicians 4 | 60/- per Session | Rs. 75/- per Session |
| | 7. Store Keeper 1 | 50 /- per session | Rs. 60 /- per session |
| | 8. Lab attenders/ Peons 6 | 30/- per session | Rs. 40/- per session |
| 6 | **For Staff engaged in Preparation/ Printing/Custody/Distribution of Theory Question Papers** | | |
| | 1. Chairman B.E.A. | 1500/- Each Exam | Rs. 2000/- Each Exam |
| | 2. Member Secretary | 1200/- Each Exam | Rs. 1500/- Each Exam |
| | 3. Supervision for preparation of Proofs/sketch at DTP | 100/- per Question Paper per head | Rs. 125/- per Question Paper per head |
| | 4. Supervision of Proof reading preparation of question Paper Booklets and sealing | 100/- per Question Paper per head | Rs. 125/- per Question Paper per head |

| SL. NO. | ITEM OF WORK | EXISTING RATE OF REMUNERATION | REVISED RATE OF REMUNERATION |
|---|---|---|---|
| | 5. Staff engaged from Govt. College of Pharmacy in conn ection with Printing of Question Paper etc., | 600/- per head | Rs. 750/- per head |
| | 6. Minesterial Staff assisting distribution of Question Paper | 600/- per head | Rs. 750/- per head |
| | 7. Group D. staff assisting distribution of Question Paper | 300/- per head | Rs. 400/- per head |
| 7 | **For Chairman/members appointed to** | | |
| | a) Chairman | 900/- (Separate set up for each function) | Rs. 1250/- (Separate set up for each function) |
| | b) Member Secretary/Member | 500/- (Separate set up for each function) | Rs. 750/- (Separate set up for each function) |
| | b) Member | 500/- (Separate set up for each function) | Rs. 750/- (Separate set up for each function) |
| 8 | **For staff engaged in Re-totalling of Answer Books** | | |
| | 1) Member Secretary | 8/- per paper | Rs. 10/- per paper |
| | 2) Ministerial Assistance - 4 | 18/- per paper | Rs. 20/- per paper |
| | 3) Typist | 2/- per Paper | Rs. 5/- per Paper |
| | 4) Accountant | 2/- per Paper | Rs. 5/- per Paper |
| 9 | **For Staff engaged for Assistance in valuation** | | |
| | 1) Chief Custodian | 3500/- Per Exam | Rs. 5000/- Each Exam |
| | 2) Asst. Custodian | 3000/- per paper | Rs. 4000/-per paper |
| | 3) Gazetted Asst./ Superintendent | 1000/- per Exam | Rs. 1250/-Each Exam |
| | 4) Assistants (FDA/SDA/Typist) | 1000/- per Exam | Rs. 1250/- Each Exam |
| | 5) Group D staff | 600/- per Exam | Rs. 750/-Each Exam |
| | 6) Part-time Menniel staff | 50/- per day | Rs. 75/- per day |
| 10 | **For Staff engaged for Assistance in Re-valuation** | | |
| | 1) Custodian | | Rs. 1500/- Each Exam |
| | 2) Gazetted Asst./Superintendent | | Rs. 900/- Each Exam |
| | 3) Assistants (FDA/SDA/Typist) -2 | | Rs. 900/- Each Exam |
| | 4) Group D staff-2 | | Rs. 500/- Each Exam |
| | 6) Part-time Menniel staff - 4 | | Rs. 75/- per day |
| 11 | **For Data Feeding operators for computerisation** | | |
| | a) Keying of freshers application | 50/-p. per entry separately for each exams | 50/-p. per entry separately for each exams |
| | b)Keying of Repeaters application | 50/-p. per entry separately for each exams | 50/-p. per entry separately for each exams |
| | c) Keying of marks list | 50/-p. per entry separately for each exams | 50/-p. per entry separately for each exams |
| | d) for other Data entries pertaining to admission | 50/-p. per entry separately for each exams | 50/-p. per entry separately for each exams |

| SL. NO. | ITEM OF WORK | EXISTING RATE OF REMUNERATION | REVISED RATE OF REMUNERATION |
|---|---|---|---|
| 12 | **For services of Techincal Experts for computerisation** | | |
| | a) System Anaylist | 1500/- per Exam | Rs. 2000/- Each Exam |
| | b) Programmers | 1200/- per person and per exam | Rs. 1500/- per person and for each exam |
| | C) Chief Incharge for Tabulation work | - | Rs. 4500/- each exam |
| | d) Assistant Incharge for Tabulation work | - | Rs. 4000/- per person for each exam |
| | e) Console Operator/Trained FDA | 1000/- Per person and per exam | Rs. 1250/- Per person and for each exam |
| | f) Group D. | 500/- per person and per exam | Rs. 650/- per person and for each exam |
| 13 | **For the services of D.Pharm Admission Approval** | | |
| | a) Chief Incharge for Admission Approval work | - | Rs. 4500/- |
| | b) Assistant Incharge for Admission Approval work | - | Rs. 4000/-Per person |
| 14 | **TA and DA for teaching staff engaged in valuation centers/practical exam centres** | | |
| | a) For staff from out side | 200 per day | A) T.A.: I class Railway fare or Bus fare (including Luxury Bus from Head Quarters to place of duty point or vice versa without production of tickets and certificates. Auto charges Rs. 25/- from Railway station/Bus station to duty point or vice versa is admissible in all places.<br>B) DAILY ALLOWANCE:<br>1) Halt at Bangalore- Rs. 300/- per day<br>2) Halt at Other Corporation Cities- Rs. 250/- per day.<br>3) Halt at other places- Rs. 200/- per day |
| | b) for staff engaged from one institution to other institutions/Board for examination/Board work | 75 per day | local Conveyance: Rs. 100/- per day |
| 15 | **For Inspection Squads touring during Exams** | | |
| | a) Chairman | 1500/- + TA as per Rules | Rs. 2000/- + TA as per Rules |
| | b) Member | 1000/- + TA as per Rules | Rs. 1500/- + TA as per Rules |
| 16 | **For Board staff engaged in Exam work** | | |
| | a) Gazetted Assist/ Supdts/ FDA/ SDA/Typist | 1000/- Per exam | Rs.1500/- Per exam |
| | b) Group D Staff | 350/- per exam | Rs. 450/- per exam |
| | Note: 1. Above rates are admissible separately for Pre and Post Exam activities during each exam<br>2. Pre exam activities means verification and approval of admission, Exam application , admission tickets etc.,<br>3. Post exams activities means, Desptach of results, Marks statement and Marks cards and Deputation for Training etc., | | |

| SL. NO. | ITEM OF WORK | EXISTING RATE OF REMUNERATION | REVISED RATE OF REMUNERATION |
|---|---|---|---|
| 17 | **Officers related to for all activities of Board and computerisation** | | |
| | a) Chairman | 15,000/- per exam | Rs. 20,000/- per exam |
| | b) Member Secretary | 10000/- per exam | Rs. 15,000/- per exam |
| 18 | **For coding and D-coding Answer Books** | | |
| | a) Verification | 5/- per cover containing 20 Answer Books | Rs. 7.50/- per cover containing 20 Answer Books |
| | b) Coding and | 80/- Paise per Ans. Book (Decoding works is merged with coding work) | Rs. 1/- per Ans. Book(Decoding works is merged with coding work) |
| | c) De-coding | | |
| 19 | **For Board Members attending the Board meeting** | | |
| | a) Chairman | 1000/- per meeting | Rs. 1300/- per meeting |
| | b) Member Secretary | 750/- per meeting | Rs. 1000/- per meeting |
| | c) Member | 600/- Per meeting | Rs. 800/- Per meeting |
| | d) Special Invitee | 500/- per meeting | Rs. 700/- per meeting |
| | Note: TA & DA as per Board Manual for atttending from out side | | |
| 20 | **For Preparation and verification of** | | |
| | D.Pharm Certificates (Original/Duplicate) and Verification | 4/- per certificate | Rs. 10/- per marks Certificate (Allocated as under) |
| | Superintendent-1 | | Rs. 3/- |
| | Ministerial Assistant -1 (FDA/SDA) | | Rs. 3/- |
| | Typist-1 | | Rs. 3/- |
| | Group D/Menial Staff | | Rs. 1/- |
| | D.Pharm Marks cards (Original/Duplicate) and Verification | | Rs. 10/- per marks card (Allocated as under) |
| | Superintendent-1 | | Rs. 3/- |
| | Ministerial Assistant -1 (FDA/SDA) | | Rs. 3/- |
| | Typist-1 | | Rs. 3/- |
| | Group D/Menial Staff -2 | | Rs. 1/- |
| 21 | Verification of Data Entry of Marks list may be distributed among the Board staff engaged in this. | | Rs. 5/- per student |
| 22 | Verification of Result sheet (Verification of result sheet includes the verification of Theory marks entry, Practical marks entry, sessional marks entry, Absentee statement and Back exam marks entry) | | Rs. 5/- per students |

**T.N. NARASIMHARAJU**
Under Secretary to Government, (I/C)
Health and Family Welfare Department
(IMD & Co-ordination)

**ANNEXURE - II**
**to G.O. No:HFW 361 PTD 2012. Dated:29.04.2014**
**REVISION OF EXAMINATION FEES FOR D. PHARM COURSE**

| SL. NO. | ITEM OF WORK | EXISTING RATE OF FEES | REVISED RATE OF FEES | REMARKS |
|---|---|---|---|---|
| 1 | 2 | 3 | 4 | 5 |
| 1 | Registration of New College | - | 10000-00 | - |
| 2 | Affiliation, Service Charges and Annual Fees | 20000-00 | 20000-00 | - |
| 3 | Students Registration Fees | | | - |
| | a) Karnataka | 200-00 | 250-00 | - |
| | b) Non-Karnataka | 1000-00 | 1500-00 | - |
| | c) NRI | 8000-00 | 8000-00 | - |
| 4 | Eligibility Fees for out of State Student | 1000-00 | 1500-00 | - |
| 5 | Examination Fees (D.Pharm Part-I & II Exams) | | | - |
| | a) All subjects | 400-00 | 600-00 | - |
| | b) Up-to 2 subjects | 200-00 | 300-00 | - |
| | c) More than 2 Subjects | 400-00 | 600-00 | - |
| | d) Fore SC/ST students | Nil | Nil | - |
| | e) Late fees (Fine) | 50/- per day from last day for 7 days Max Rs. 350/- | 75/- per day from last day for 7 days Max Rs. 500/- | - |
| 6 | Examination Application Fees | 5-00 | 10-00 | - |
| 7 | Marks Card fees | 50-00 | 75-00 | - |
| 8 | Provisional D.Pharm Certificate | 200-00 | 300-00 | - |
| 9 | Duplicate D.Pharm Certificate | 500-00 | 750-00 | - |
| 10 | Duplicate Admission Ticket | 150-00 | 200-00 | - |
| 11 | Duplicate Marks Card | 500-00 | 750-00 | for each marks card |
| 12 | Re-totalling of Answer Scripts | 300-00 | 500-00 | per script |
| 13 | Re-valuation of Asnwer Scripts | 1000-00 | 1000-00 | per subject |
| 14 | Transfer fees from One College to another College | 1000-00 | 2000-00 | per student |
| 15 | Fees for issue of official transcription of official documents by board like marks card, certificate etc., | 500-00 | 750-00 | - |
| 16 | Consolidated Marks Card Fees (Part-I & II Separately) | 500-00 | 750-00 | - |
| 17 | Migration Certificate Fees | 300-00 | 500-00 | - |
| 18 | Fees for Rank Certificate | 100-00 | 200-00 | - |
| 19 | Fees for issue of D.Pharm Certificate | 200-00 | 350-00 | - |
| 20 | Fees for Name Correction of Marks Cards after 3 months and above | 100-00 | Nil | - |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| SL. NO. | ITEM OF WORK | EXISTING RATE OF FEES | REVISED RATE OF FEES | REMARKS |
|---|---|---|---|---|
| 1 | 2 | 3 | 4 | 5 |
| 21 | Verification of D.Pharm Certificate/ Marks Card | 100-00 | 200-00 | per document |
| 22 | **Late fees payable by the institution for late submission of documents after last date fixed by the Board** | | | |
| | a) Average Session Marks Statement | 2500-00 | 2500-00 | till 10 days from the last date |
| | | | 5000-00 | from 11 days to 20 days |
| | b) Admission Statement with all relevant documents | 5000-00 | 1000-00 for each student | for 5 days up to a maximum Rs. 20000/- |
| | | | 1200-00 for each student | for 10 days up to a maximum of Rs. 30000/- |
| | | | 1500-00 for each student | for 15 days up to a maximum of Rs. 40,000/- |
| | c) Examination Application with all relevant documents | 2500-00 | Rs. 500/- per student per day up to a maximum of 7 days | |
| 23 | Wrong entries in diary/Marks List/Answer Book/ Comparative absentee statement.Sessional Marks List/ Exam application Form/others | Rs.100/- per mistake with a minimum of Rs.300/- | Rs.200/- per mistake with a minimum of Rs.500/- | - |

**T.N. NARASIMHARAJU**
Under Secretary to Government, (I/C)
Health and Family Welfare Department
(IMD & Co-ordination)

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಸೋಮವಾರ, ಏಪ್ರಿಲ್ ೨೧, ೨೦೧೪ (ವೈಶಾಖ ೧, ಶಕ ವರ್ಷ ೧೯೩೬) | ನಂ. ೨೭೦ |
|---|---|---|
| Part – III | Bangalore, Monday, April 21, 2014 (Vaishakha 1, Shaka Varsha 1936) | No. 270 |


### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಅಧಿಸೂಚನೆ**

**ಸಂ. ಗ್ರಾಅಪ 17 ಜಿಪಸ 2014, ಬೆಂಗಳೂರು, ದಿನಾಂಕ: 16–04–2014**

ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳ ಮೀಸಲಾತಿ) ನಿಯಮಗಳು, 2005 ಮತ್ತು (ತಿದ್ದುಪಡಿ) ನಿಯಮಗಳು, 2010 ರಲ್ಲಿ ನಿಗದಿಪಡಿಸಿದ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 177(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜನವರಿ 2011 ರಲ್ಲಿ ರಚಿತವಾಗಿರುವ ಜಿಲ್ಲಾ ಪಂಚಾಯತಿಗಳ ಮೂರನೇ ಅವಧಿಗೆ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿಯನ್ನು ನಿಗಧಿಗೊಳಿಸಬೇಕಾಗಿದ್ದು, ಅದರಂತೆ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಲ್ಲಿ ಅನುಸೂಚಿತ ಪಂಗಡ / ಅನುಸೂಚಿತ ಜಾತಿ / ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಹುದ್ದೆಗಳು ಈ ಕೆಳಗೆ ನಿರ್ದಿಷ್ಟಪಡಿಸಲಾಗಿದೆ.

ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂ. 41091 ಹಾಗೂ ಇತರೆ ರಿಟ್ ಅರ್ಜಿಗಳು/2012, ದಿನಾಂಕ 11.10.2012ರಲ್ಲಿ ನೀಡಿರುವ ನಿರ್ದೇಶನದಂತೆ ಮೀಸಲಾತಿ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|
| 1 | 2 | 3 | 4 |
| 1 | ಬಾಗಲಕೋಟೆ | ಹಿಂದುಳಿದ ವರ್ಗ–ಅ | ಅನುಸೂಚಿತ ಪಂಗಡ |
| 2 | ಬೆಂಗಳೂರು (ನಗರ) | ಸಾಮಾನ್ಯ | ಸಾಮಾನ್ಯ (ಮ) |
| 3 | ಬೆಂಗಳೂರು (ಗ್ರಾ) | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ |
| 4 | ಬೆಳಗಾವಿ | ಹಿಂದುಳಿದ ವರ್ಗ–ಅ (ಮ) | ಅನುಸೂಚಿತ ಜಾತಿ |
| 5 | ಬಳ್ಳಾರಿ | ಅನುಸೂಚಿತ ಪಂಗಡ | ಸಾಮಾನ್ಯ |
| 6 | ಬೀದರ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| 7 | ವಿಜಾಪುರ | ಹಿಂದುಳಿದ ವರ್ಗ–ಅ | ಅನುಸೂಚಿತ ಜಾತಿ (ಮ) |
| 8 | ಚಾಮರಾಜನಗರ | ಸಾಮಾನ್ಯ | ಅನುಸೂಚಿತ ಪಂಗಡ (ಮ) |
| 9 | ಚಿಕ್ಕಬಳ್ಳಾಪುರ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| 10 | ಚಿಕ್ಕಮಗಳೂರು | ಸಾಮಾನ್ಯ | ಹಿಂದುಳಿದ ವರ್ಗ–ಅ (ಮ) |
| 11 | ಚಿತ್ರದುರ್ಗ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ (ಮ) |
| 12 | ದಕ್ಷಿಣ ಕನ್ನಡ | ಹಿಂದುಳಿದ ವರ್ಗ–ಅ (ಮ) | ಸಾಮಾನ್ಯ |
| 13 | ದಾವಣಗೆರೆ | ಅನುಸೂಚಿತ ಪಂಗಡ (ಮ) | ಹಿಂದುಳಿದ ವರ್ಗ–ಬ |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|
| 1 | 2 | 3 | 4 |
| 14 | ಧಾರವಾಡ | ಹಿಂದುಳಿದ ವರ್ಗ–ಅ (ಮ) | ಸಾಮಾನ್ಯ |
| 15 | ಗದಗ | ಹಿಂದುಳಿದ ವರ್ಗ–ಬ (ಮ) | ಹಿಂದುಳಿದ ವರ್ಗ–ಅ |
| 16 | ಗುಲ್ಬರ್ಗಾ | ಅನುಸೂಚಿತ ಜಾತಿ (ಮ) | ಸಾಮಾನ್ಯ (ಮ) |
| 17 | ಹಾಸನ | ಸಾಮಾನ್ಯ (ಮ) | ಸಾಮಾನ್ಯ |
| 18 | ಹಾವೇರಿ | ಹಿಂದುಳಿದ ವರ್ಗ–ಅ | ಸಾಮಾನ್ಯ (ಮ) |
| 19 | ಕೊಡಗು | ಸಾಮಾನ್ಯ (ಮ) | ಹಿಂದುಳಿದ ವರ್ಗ–ಬ (ಮ) |
| 20 | ಕೋಲಾರ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಅ (ಮ) |
| 21 | ಕೊಪ್ಪಳ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ |
| 22 | ಮಂಡ್ಯ | ಹಿಂದುಳಿದ ವರ್ಗ–ಬ | ಸಾಮಾನ್ಯ (ಮ) |
| 23 | ಮೈಸೂರು | ಅನುಸೂಚಿತ ಜಾತಿ (ಮ) | ಸಾಮಾನ್ಯ |
| 24 | ರಾಯಚೂರು | ಅನುಸೂಚಿತ ಜಾತಿ (ಮ) | ಸಾಮಾನ್ಯ (ಮ) |
| 25 | ರಾಮನಗರ | ಸಾಮಾನ್ಯ | ಸಾಮಾನ್ಯ (ಮ) |
| 26 | ಶಿವಮೊಗ್ಗ | ಸಾಮಾನ್ಯ | ಸಾಮಾನ್ಯ |
| 27 | ತುಮಕೂರು | ಅನುಸೂಚಿತ ಜಾತಿ | ಸಾಮಾನ್ಯ (ಮ) |
| 28 | ಉತ್ತರ ಕನ್ನಡ | ಸಾಮಾನ್ಯ | ಸಾಮಾನ್ಯ (ಮ) |
| 29 | ಉಡುಪಿ | ಸಾಮಾನ್ಯ (ಮ) | ಸಾಮಾನ್ಯ |
| 30 | ಯಾದಗಿರಿ | ಸಾಮಾನ್ಯ (ಮ) | ಅನುಸೂಚಿತ ಜಾತಿ (ಮ) |

ಅಧಿಸೂಚನೆಯನ್ನು ಪ್ರಕಟಿಸಲು ಚುನಾವಣೆಯ ನೀತಿ ಸಂಹಿತೆಯಿಂದ ವಿನಾಯತಿಯನ್ನು ಕರ್ನಾಟಕ ಮುಖ್ಯ ಚುನಾವಣಾಧಿಕಾರಿಗಳ ಪತ್ರ ಸಂಖ್ಯೆ: ಸಿಆಸುಇ 412 ಎಂಸಿಸಿ 2014, ದಿನಾಂಕ: 09.04.2014 ರಂತೆ ಪಡೆಯಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಜುಲ್ಫಿಖಾರ್ ಉಲ್ಲಾ**
ನಿರ್ದೇಶಕರು (ಪಂ.ರಾಜ್–2) ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – III<br>Part – III | ಬೆಂಗಳೂರು, ಸೋಮವಾರ, ಏಪ್ರಿಲ್ ೨೧, ೨೦೧೪ (ವೈಶಾಖ ೧, ಶಕ ವರ್ಷ ೧೯೩೬)<br>**Bangalore, Monday, April 21, 2014 (Vaishakha 1, Shaka Varsha 1936)** | ನಂ. ೨೭೧<br>**No. 271** |
|---|---|---|


## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂ. ಗ್ರಾಅಪ 19 ಜಿಪಸ 2014, ಬೆಂಗಳೂರು, ದಿನಾಂಕ: 16–04–2014**

ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳ ಮೀಸಲಾತಿ) ನಿಯಮಗಳು, 2005 ಮತ್ತು (ತಿದ್ದುಪಡಿ) ನಿಯಮಗಳು, 2010 ರಲ್ಲಿ ನಿಗಧಿಪಡಿಸಿದಂತೆ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 138(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜನವರಿ/ಫೆಬ್ರವರಿ 2011 ರಲ್ಲಿ ರಚಿತವಾಗಿರುವ ತಾಲ್ಲೂಕು ಪಂಚಾಯತಿಗಳ ಮೂರನೇ ಅವಧಿಗೆ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿಯನ್ನು ನಿಗಧಿಗೊಳಿಸಬೇಕಾಗಿದ್ದು, ಅದರಂತೆ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಲ್ಲಿ ಅನುಸೂಚಿತ ಪಂಗಡ / ಅನುಸೂಚಿತ ಜಾತಿ / ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಹುದ್ದೆಗಳು ಈ ಕೆಳಗೆ ನಿರ್ದಿಷ್ಟಪಡಿಸಲಾಗಿದೆ

ಮೂರನೇ ಅವಧಿಗೆ ನಿಗದಿಗೊಳಿಸಲಾಗಿರುವ ಮೀಸಲಾತಿ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ತಾಲ್ಲೂಕಿನ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|---|
| 1 | 2 | 3 | 4 | 5 |
| 1 | ಬಾಗಲಕೋಟೆ | | | |
| | | ಬಾಗಲಕೋಟೆ | ಅನುಸೂಚಿತ ಪಂಗಡ | ಹಿಂದುಳಿದ ವರ್ಗ–ಅ (ಮ) |
| | | ಬಾದಾಮಿ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ಹುನಗುಂದ | ಸಾಮಾನ್ಯ (ಮ) | ಅನುಸೂಚಿತ ಪಂಗಡ |
| | | ಬೀಳಗಿ | ಸಾಮಾನ್ಯ (ಮ) | ಅನುಸೂಚಿತ ಪಂಗಡ (ಮ) |
| | | ಮುಧೋಳ | ಸಾಮಾನ್ಯ (ಮ) | ಅನುಸೂಚಿತ ಪಂಗಡ |
| | | ಜಮಖಂಡಿ | ಹಿಂದುಳಿದ ವರ್ಗ–ಅ (ಮ) | ಅನುಸೂಚಿತ ಜಾತಿ |
| 2 | ಬೆಂಗಳೂರು (ನಗರ) | | | |
| | | ಬೆಂಗಳೂರು ಉತ್ತರ | ಹಿಂದುಳಿದ ವರ್ಗ–ಅ (ಮ) | ಸಾಮಾನ್ಯ |
| | | ಬೆಂಗಳೂರು ದಕ್ಷಿಣ | ಸಾಮಾನ್ಯ (ಮ) | ಅನುಸೂಚಿತ ಜಾತಿ (ಮ) |
| | | ಬೆಂಗಳೂರು ಪೂರ್ವ | ಹಿಂದುಳಿದ ವರ್ಗ–ಅ | ಅನುಸೂಚಿತ ಪಂಗಡ (ಮ) |
| | | ಆನೇಕಲ್ | ಅನುಸೂಚಿತ ಜಾತಿ (ಮ) | ಸಾಮಾನ್ಯ |
| 3 | ಬೆಂಗಳೂರು (ಗ್ರಾ) | | | |
| | | ದೊಡ್ಡಬಳ್ಳಾಪುರ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಅ |
| | | ದೇವನಹಳ್ಳಿ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಅ |
| | | ಹೊಸಕೋಟೆ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ನೆಲಮಂಗಲ | ಹಿಂದುಳಿದ ವರ್ಗ–ಅ | ಅನುಸೂಚಿತ ಪಂಗಡ (ಮ) |
| 4 | ಬೆಳಗಾವಿ | | | |
| | | ಬೆಳಗಾವಿ | ಹಿಂದುಳಿದ ವರ್ಗ–ಬ(ಮ) | ಸಾಮಾನ್ಯ |
| | | ಖಾನಾಪುರ | ಸಾಮಾನ್ಯ (ಮ) | ಅನುಸೂಚಿತ ಪಂಗಡ(ಮ) |
| | | ಹುಕ್ಕೇರಿ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ–ಅ |
| | | ರಾಮದುರ್ಗ | ಹಿಂದುಳಿದ ವರ್ಗ–ಬ | ಅನುಸೂಚಿತ ಜಾತಿ (ಮ) |
| | | ಬೈಲಹೊಂಗಲ | ಹಿಂದುಳಿದ ವರ್ಗ–ಬ(ಮ) | ಅನುಸೂಚಿತ ಪಂಗಡ |
| | | ಗೋಕಾಕ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ಸವದತ್ತಿ | ಅನುಸೂಚಿತ ಪಂಗಡ (ಮ) | ಹಿಂದುಳಿದ ವರ್ಗ–ಅ |
| | | ಅಥಣಿ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| | | ರಾಯಬಾಗ | ಹಿಂದುಳಿದ ವರ್ಗ–ಬ | ಅನುಸೂಚಿತ ಪಂಗಡ(ಮ) |
| | | ಚಿಕ್ಕೋಡಿ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| 5 | ಬಳ್ಳಾರಿ | | | |
| | | ಬಳ್ಳಾರಿ | ಸಾಮಾನ್ಯ (ಮ) | ಅನುಸೂಚಿತ ಪಂಗಡ |
| | | ಸಿರಗುಪ್ಪ | ಸಾಮಾನ್ಯ | ಸಾಮಾನ್ಯ (ಮ) |
| | | ಹೊಸಪೇಟೆ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ–ಅ |
| | | ಸಂಡೂರು | ಅನುಸೂಚಿತ ಪಂಗಡ (ಮ) | ಸಾಮಾನ್ಯ |
| | | ಕೂಡ್ಲಿಗಿ | ಅನುಸೂಚಿತ ಪಂಗಡ (ಮ) | ಹಿಂದುಳಿದ ವರ್ಗ–ಅ |
| | | ಹಡಗಲಿ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ಹಗರಿಬೊಮ್ಮನಹಳ್ಳಿ | ಸಾಮಾನ್ಯ | ಅನುಸೂಚಿತ ಜಾತಿ (ಮ) |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ತಾಲ್ಲೂಕಿನ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|---|
| **1** | **2** | **3** | **4** | **5** |
| 6 | ಬೀದರ | | | |
| | | ಭಾಲ್ಕಿ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ಬಸವಕಲ್ಯಾಣ | ಸಾಮಾನ್ಯ | ಅನುಸೂಚಿತ ಜಾತಿ |
| | | ಔರಾದ್ | ಅನುಸೂಚಿತ ಜಾತಿ (ಮ) | ಸಾಮಾನ್ಯ |
| | | ಹುಮ್ನಾಬಾದ್ | ಸಾಮಾನ್ಯ | ಹಿಂದುಳಿದ ವರ್ಗ–ಅ |
| | | ಬೀದರ | ಅನುಸೂಚಿತ ಪಂಗಡ | ಹಿಂದುಳಿದ ವರ್ಗ–ಅ(ಮ) |
| 7 | ವಿಜಾಪುರ | | | |
| | | ವಿಜಾಪುರ | ಹಿಂದುಳಿದ ವರ್ಗ–ಬ(ಮ) | ಅನುಸೂಚಿತ ಪಂಗಡ |
| | | ಬಸವನಬಾಗೇವಾಡಿ | ಹಿಂದುಳಿದ ವರ್ಗ–ಬ(ಮ) | ಅನುಸೂಚಿತ ಪಂಗಡ |
| | | ಮುದ್ದೇಬಿಹಾಳ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ |
| | | ಇಂಡಿ | ಹಿಂದುಳಿದ ವರ್ಗ–ಅ(ಮ) | ಅನುಸೂಚಿತ ಜಾತಿ |
| | | ಸಿಂಧಗಿ | ಹಿಂದುಳಿದ ವರ್ಗ–ಬ | ಅನುಸೂಚಿತ ಪಂಗಡ (ಮ) |
| 8 | ಚಾಮರಾಜನಗರ | | | |
| | | ಚಾಮರಾಜನಗರ | ಹಿಂದುಳಿದ ವರ್ಗ–ಅ(ಮ) | ಅನುಸೂಚಿತ ಜಾತಿ |
| | | ಗುಂಡ್ಲುಪೇಟೆ | ಸಾಮಾನ್ಯ | ಸಾಮಾನ್ಯ (ಮ) |
| | | ಯಳಂದೂರು | ಹಿಂದುಳಿದ ವರ್ಗ–ಅ | ಅನುಸೂಚಿತ ಪಂಗಡ (ಮ) |
| | | ಕೊಳ್ಳೇಗಾಲ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಅ |
| 9 | ಚಿಕ್ಕಬಳ್ಳಾಪುರ | | | |
| | | ಗೌರಿಬಿದನೂರು | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ (ಮ) |
| | | ಚಿಂತಾಮಣಿ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ–ಅ |
| | | ಬಾಗೇಪಲ್ಲಿ | ಸಾಮಾನ್ಯ | ಅನುಸೂಚಿತ ಪಂಗಡ (ಮ) |
| | | ಚಿಕ್ಕಬಳ್ಳಾಪುರ | ಹಿಂದುಳಿದ ವರ್ಗ–ಅ(ಮ) | ಅನುಸೂಚಿತ ಜಾತಿ |
| | | ಶಿಡ್ಲಘಟ್ಟ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ಗುಡಿಬಂಡೆ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| 10 | ಚಿಕ್ಕಮಗಳೂರು | | | |
| | | ಚಿಕ್ಕಮಗಳೂರು | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ–ಅ |
| | | ಕಡೂರು | ಹಿಂದುಳಿದ ವರ್ಗ–ಅ(ಮ) | ಅನುಸೂಚಿತ ಪಂಗಡ |
| | | ತರೀಕೆರೆ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಅ(ಮ) |
| | | ಕೊಪ್ಪ | ಸಾಮಾನ್ಯ (ಮ) | ಹಿಂದುಳಿದ ವರ್ಗ (ಅ) |
| | | ನರಸಿಂಹರಾಜಪುರ | ಹಿಂದುಳಿದ ವರ್ಗ (ಅ) | ಸಾಮಾನ್ಯ (ಮ) |
| | | ಮೂಡಿಗೆರೆ | ಸಾಮಾನ್ಯ | ಸಾಮಾನ್ಯ (ಮ) |
| | | ಶೃಂಗೇರಿ | ಅನುಸೂಚಿತ ಜಾತಿ (ಮ) | ಸಾಮಾನ್ಯ (ಮ) |
| 11 | ಚಿತ್ರದುರ್ಗ | | | |
| | | ಚಿತ್ರದುರ್ಗ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ (ಅ) |
| | | ಹಿರಿಯೂರು | ಅನುಸೂಚಿತ ಜಾತಿ | ಸಾಮಾನ್ಯ |
| | | ಚಳ್ಳಕೆರೆ | ಅನುಸೂಚಿತ ಪಂಗಡ (ಮ) | ಹಿಂದುಳಿದ ವರ್ಗ–ಅ(ಮ) |
| | | ಹೊಸದುರ್ಗ | ಸಾಮಾನ್ಯ | ಸಾಮಾನ್ಯ (ಮ) |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ತಾಲ್ಲೂಕಿನ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|---|
| 1 | 2 | 3 | 4 | 5 |
| | | ಹೊಳಲ್ಕೆರೆ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ–ಅ(ಮ) |
| | | ಮೊಳಕಾಲ್ಮೂರು | ಅನುಸೂಚಿತ ಪಂಗಡ (ಮ) | ಸಾಮಾನ್ಯ |
| 12 | ದಕ್ಷಿಣ ಕನ್ನಡ | | | |
| | | ಮಂಗಳೂರು | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ (ಅ) |
| | | ಬಂಟ್ವಾಳ | ಹಿಂದುಳಿದ ವರ್ಗ (ಅ) | ಸಾಮಾನ್ಯ (ಮ) |
| | | ಪುತ್ತೂರು | ಸಾಮಾನ್ಯ (ಮ) | ಸಾಮಾನ್ಯ |
| | | ಸುಳ್ಯ | ಸಾಮಾನ್ಯ | ಹಿಂದುಳಿದ ವರ್ಗ–ಅ(ಮ) |
| | | ಬೆಳ್ತಂಗಡಿ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| 13 | ದಾವಣಗೆರೆ | | | |
| | | ದಾವಣಗೆರೆ | ಅನುಸೂಚಿತ ಪಂಗಡ (ಮ) | ಸಾಮಾನ್ಯ (ಮ) |
| | | ಹರಿಹರ | ಹಿಂದುಳಿದ ವರ್ಗ (ಅ) | ಸಾಮಾನ್ಯ (ಮ) |
| | | ಜಗಳೂರು | ಅನುಸೂಚಿತ ಪಂಗಡ | ಸಾಮಾನ್ಯ (ಮ) |
| | | ಚನ್ನಗಿರಿ | ಅನುಸೂಚಿತ ಜಾತಿ (ಮ) | ಸಾಮಾನ್ಯ |
| | | ಹೊನ್ನಾಳಿ | ಹಿಂದುಳಿದ ವರ್ಗ (ಅ) | ಸಾಮಾನ್ಯ (ಮ) |
| | | ಹರಪನಹಳ್ಳಿ | ಅನುಸೂಚಿತ ಜಾತಿ | ಸಾಮಾನ್ಯ (ಮ) |
| 14 | ಧಾರವಾಡ | | | |
| | | ಧಾರವಾಡ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ಹುಬ್ಬಳ್ಳಿ | ಅನುಸೂಚಿತ ಜಾತಿ | ಸಾಮಾನ್ಯ |
| | | ಕಲಘಟಗಿ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| | | ಕುಂದಗೋಳ | ಅನುಸೂಚಿತ ಜಾತಿ | ಸಾಮಾನ್ಯ (ಮ) |
| | | ನವಲಗುಂದ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| 15 | ಗದಗ | | | |
| | | ಗದಗ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ(ಮ) |
| | | ಶಿರಹಟ್ಟಿ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ನರಗುಂದ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ರೋಣ | ಸಾಮಾನ್ಯ | ಸಾಮಾನ್ಯ (ಮ) |
| | | ಮುಂಡರಗಿ | ಸಾಮಾನ್ಯ (ಮ) | ಸಾಮಾನ್ಯ |
| 16 | ಗುಲ್ಬರ್ಗಾ | | | |
| | | ಆಳಂದ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಅ(ಮ) |
| | | ಅಫಜಲಪುರ | ಸಾಮಾನ್ಯ (ಮ) | ಹಿಂದುಳಿದ ವರ್ಗ (ಬ) |
| | | ಗುಲ್ಬರ್ಗಾ | ಅನುಸೂಚಿತ ಜಾತಿ (ಮ) | ಸಾಮಾನ್ಯ |
| | | ಚಿಂಚೋಳಿ | ಅನುಸೂಚಿತ ಜಾತಿ (ಮ) | ಸಾಮಾನ್ಯ |
| | | ಸೇಡಂ | ಅನುಸೂಚಿತ ಜಾತಿ | ಸಾಮಾನ್ಯ (ಮ) |
| | | ಚಿತ್ತಾಪುರ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಅ(ಮ) |
| | | ಜೇವರ್ಗಿ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ(ಮ) |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ತಾಲ್ಲೂಕಿನ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|---|
| 1 | 2 | 3 | 4 | 5 |
| 17 | ಹಾಸನ | | | |
| | | ಹಾಸನ | ಸಾಮಾನ್ಯ | ಸಾಮಾನ್ಯ (ಮ) |
| | | ಬೇಲೂರು | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ–ಅ(ಮ) |
| | | ಚನ್ನರಾಯಪಟ್ಟಣ | ಹಿಂದುಳಿದ ವರ್ಗ–ಅ | ಸಾಮಾನ್ಯ |
| | | ಅರಕಲಗೂಡು | ಹಿಂದುಳಿದ ವರ್ಗ–ಅ | ಸಾಮಾನ್ಯ (ಮ) |
| | | ಆಲೂರು | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ಅರಸೀಕೆರೆ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ(ಮ) |
| | | ಹೊಳೆನರಸೀಪುರ | ಸಾಮಾನ್ಯ | ಸಾಮಾನ್ಯ (ಮ) |
| | | ಸಕಲೇಶಪುರ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| 18 | ಹಾವೇರಿ | | | |
| | | ಹಾವೇರಿ | ಸಾಮಾನ್ಯ | ಸಾಮಾನ್ಯ (ಮ) |
| | | ರಾಣೆಬೆನ್ನೂರು | ಸಾಮಾನ್ಯ | ಸಾಮಾನ್ಯ (ಮ) |
| | | ಬ್ಯಾಡಗಿ | ಹಿಂದುಳಿದ ವರ್ಗ–ಅ | ಸಾಮಾನ್ಯ (ಮ) |
| | | ಹಿರೇಕೆರೂರು | ಸಾಮಾನ್ಯ (ಮ) | ಸಾಮಾನ್ಯ |
| | | ಹಾನಗಲ್ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| | | ಶಿಗ್ಗಾಂವ್ | ಹಿಂದುಳಿದ ವರ್ಗ–ಅ | ಅನುಸೂಚಿತ ಜಾತಿ (ಮ) |
| | | ಸವಣೂರು | ಹಿಂದುಳಿದ ವರ್ಗ (ಬ) | ಅನುಸೂಚಿತ ಜಾತಿ |
| 19 | ಕೊಡಗು | | | |
| | | ಸೋಮವಾರಪೇಟೆ | ಸಾಮಾನ್ಯ (ಮ) | ಸಾಮಾನ್ಯ |
| | | ಮಡಿಕೇರಿ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ವಿರಾಜಪೇಟೆ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| 20 | ಕೋಲಾರ | | | |
| | | ಶ್ರೀನಿವಾಸಪುರ | ಅನುಸೂಚಿತ ಜಾತಿ (ಮ) | ಸಾಮಾನ್ಯ |
| | | ಕೋಲಾರ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ಮಾಲೂರು | ಅನುಸೂಚಿತ ಪಂಗಡ (ಮ) | ಸಾಮಾನ್ಯ |
| | | ಬಂಗಾರಪೇಟೆ | ಅನುಸೂಚಿತ ಜಾತಿ (ಮ) | ಸಾಮಾನ್ಯ (ಮ) |
| | | ಮುಳಬಾಗಿಲು | ಸಾಮಾನ್ಯ (ಮ) | ಸಾಮಾನ್ಯ |
| 21 | ಕೊಪ್ಪಳ | | | |
| | | ಕೊಪ್ಪಳ | ಸಾಮಾನ್ಯ (ಮ) | ಸಾಮಾನ್ಯ |
| | | ಗಂಗಾವತಿ | ಸಾಮಾನ್ಯ (ಮ) | ಸಾಮಾನ್ಯ |
| | | ಯಲಬುರ್ಗಾ | ಸಾಮಾನ್ಯ (ಮ) | ಸಾಮಾನ್ಯ |
| | | ಕುಷ್ಟಗಿ | ಸಾಮಾನ್ಯ (ಮ) | ಸಾಮಾನ್ಯ |
| 22 | ಮಂಡ್ಯ | | | |
| | | ಕೆ.ಆರ್.ಪೇಟೆ | ಸಾಮಾನ್ಯ | ಸಾಮಾನ್ಯ (ಮ) |
| | | ಮದ್ದೂರು | ಸಾಮಾನ್ಯ | ಹಿಂದುಳಿದ ವರ್ಗ–ಬ(ಮ) |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ತಾಲ್ಲೂಕಿನ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|---|
| 1 | 2 | 3 | 4 | 5 |
| | | ಮಳವಳ್ಳಿ | ಸಾಮಾನ್ಯ | ಸಾಮಾನ್ಯ (ಮ) |
| | | ಮಂಡ್ಯ | ಸಾಮಾನ್ಯ | ಹಿಂದುಳಿದ ವರ್ಗ–ಅ(ಮ) |
| | | ನಾಗಮಂಗಲ | ಸಾಮಾನ್ಯ (ಮ) | ಸಾಮಾನ್ಯ |
| | | ಶ್ರೀರಂಗಪಟ್ಟಣ | ಸಾಮಾನ್ಯ (ಮ) | ಸಾಮಾನ್ಯ |
| | | ಪಾಂಡವಪುರ | ಸಾಮಾನ್ಯ (ಮ) | ಸಾಮಾನ್ಯ |
| 23 | ಮೈಸೂರು | | | |
| | | ಮೈಸೂರು | ಅನುಸೂಚಿತ ಪಂಗಡ | ಸಾಮಾನ್ಯ (ಮ) |
| | | ಟಿ.ನರಸೀಪುರ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ನಂಜನಗೂಡು | ಸಾಮಾನ್ಯ (ಮ) | ಸಾಮಾನ್ಯ (ಮ) |
| | | ಕೆ.ಆರ್.ನಗರ | ಸಾಮಾನ್ಯ | ಸಾಮಾನ್ಯ (ಮ) |
| | | ಪಿರಿಯಾಪಟ್ಟಣ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ಹೆಚ್.ಡಿ.ಕೋಟೆ | ಅನುಸೂಚಿತ ಪಂಗಡ | ಸಾಮಾನ್ಯ |
| | | ಹುಣಸೂರು | ಸಾಮಾನ್ಯ | ಸಾಮಾನ್ಯ (ಮ) |
| 24 | ರಾಯಚೂರು | | | |
| | | ಸಿಂಧನೂರು | ಸಾಮಾನ್ಯ | ಸಾಮಾನ್ಯ (ಮ) |
| | | ದೇವದುರ್ಗ | ಅನುಸೂಚಿತ ಪಂಗಡ (ಮ) | ಸಾಮಾನ್ಯ |
| | | ಲಿಂಗಸುಗೂರು | ಸಾಮಾನ್ಯ | ಹಿಂದುಳಿದ ವರ್ಗ–ಅ(ಮ) |
| | | ಮಾನ್ವಿ | ಅನುಸೂಚಿತ ಪಂಗಡ | ಹಿಂದುಳಿದ ವರ್ಗ–ಅ(ಮ) |
| | | ರಾಯಚೂರು | ಅನುಸೂಚಿತ ಪಂಗಡ (ಮ) | ಸಾಮಾನ್ಯ |
| 25 | ರಾಮನಗರ | | | |
| | | ಕನಕಪುರ | ಸಾಮಾನ್ಯ | ಹಿಂದುಳಿದ ವರ್ಗ–ಬ(ಮ) |
| | | ಮಾಗಡಿ | ಸಾಮಾನ್ಯ (ಮ) | ಸಾಮಾನ್ಯ |
| | | ಚನ್ನಪಟ್ಟಣ | ಸಾಮಾನ್ಯ | ಸಾಮಾನ್ಯ (ಮ) |
| | | ರಾಮನಗರ | ಸಾಮಾನ್ಯ | ಸಾಮಾನ್ಯ (ಮ) |
| 26 | ಶಿವಮೊಗ್ಗ | | | |
| | | ಭದ್ರಾವತಿ | ಸಾಮಾನ್ಯ (ಮ) | ಸಾಮಾನ್ಯ |
| | | ಹೊಸನಗರ | ಸಾಮಾನ್ಯ (ಮ) | ಸಾಮಾನ್ಯ (ಮ) |
| | | ಸಾಗರ | ಸಾಮಾನ್ಯ (ಮ) | ಹಿಂದುಳಿದ ವರ್ಗ (ಬ) |
| | | ಶಿವಮೊಗ್ಗ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ಶಿಕಾರಿಪುರ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ–ಅ(ಮ) |
| | | ಸೊರಬ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ(ಮ) |
| | | ತೀರ್ಥಹಳ್ಳಿ | ಸಾಮಾನ್ಯ | ಸಾಮಾನ್ಯ (ಮ) |
| 27 | ತುಮಕೂರು | | | |
| | | ತುಮಕೂರು | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ |
| | | ಗುಬ್ಬಿ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ತಾಲ್ಲೂಕಿನ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|---|
| 1 | 2 | 3 | 4 | 5 |
| | | ಕುಣಿಗಲ್ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| | | ಮಧುಗಿರಿ | ಹಿಂದುಳಿದ ವರ್ಗ–ಅ | ಸಾಮಾನ್ಯ (ಮ) |
| | | ಚಿಕ್ಕನಾಯಕನಹಳ್ಳಿ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| | | ತಿಪಟೂರು | ಸಾಮಾನ್ಯ (ಮ) | ಹಿಂದುಳಿದ ವರ್ಗ (ಬ) |
| | | ತುರುವೇಕೆರೆ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| | | ಪಾವಗಡ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| | | ಶಿರಾ | ಹಿಂದುಳಿದ ವರ್ಗ–ಅ | ಅನುಸೂಚಿತ ಜಾತಿ |
| | | ಕೊರಟಗೆರೆ | ಸಾಮಾನ್ಯ (ಮ) | ಹಿಂದುಳಿದ ವರ್ಗ–ಅ |
| 28 | ಉತ್ತರ ಕನ್ನಡ | | | |
| | | ಕಾರವಾರ | ಹಿಂದುಳಿದ ವರ್ಗ–ಅ | ಸಾಮಾನ್ಯ |
| | | ಅಂಕೋಲ | ಸಾಮಾನ್ಯ | ಸಾಮಾನ್ಯ (ಮ) |
| | | ಕುಮಟ | ಸಾಮಾನ್ಯ | ಸಾಮಾನ್ಯ (ಮ) |
| | | ಹೊನ್ನಾವರ | ಸಾಮಾನ್ಯ (ಮ) | ಹಿಂದುಳಿದ ವರ್ಗ (ಬ) |
| | | ಭಟ್ಕಳ | ಸಾಮಾನ್ಯ | ಅನುಸೂಚಿತ ಜಾತಿ (ಮ) |
| | | ಶಿರಸಿ | ಸಾಮಾನ್ಯ (ಮ) | ಸಾಮಾನ್ಯ |
| | | ಸಿದ್ದಾಪುರ | ಸಾಮಾನ್ಯ | ಸಾಮಾನ್ಯ (ಮ) |
| | | ಯಲ್ಲಾಪುರ | ಅನುಸೂಚಿತ ಜಾತಿ | ಸಾಮಾನ್ಯ (ಮ) |
| | | ಹಳಿಯಾಳ | ಸಾಮಾನ್ಯ | ಸಾಮಾನ್ಯ (ಮ) |
| | | ಮುಂಡಗೋಡ | ಹಿಂದುಳಿದ ವರ್ಗ–ಅ | ಸಾಮಾನ್ಯ |
| | | ಜೋಯಿಡಾ | ಅನುಸೂಚಿತ ಜಾತಿ | ಸಾಮಾನ್ಯ |
| 29 | ಉಡುಪಿ | | | |
| | | ಉಡುಪಿ | ಹಿಂದುಳಿದ ವರ್ಗ–ಅ | ಸಾಮಾನ್ಯ (ಮ) |
| | | ಕುಂದಾಪುರ | ಸಾಮಾನ್ಯ | ಹಿಂದುಳಿದ ವರ್ಗ–ಬ (ಮ) |
| | | ಕಾರ್ಕಳ | ಹಿಂದುಳಿದ ವರ್ಗ–ಅ | ಸಾಮಾನ್ಯ (ಮ) |
| 30 | ಯಾದಗಿರಿ | | | |
| | | ಶೋರಾಪುರ | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| | | ಶಹಾಪುರ | ಅನುಸೂಚಿತ ಜಾತಿ | ಸಾಮಾನ್ಯ (ಮ) |
| | | ಯಾದಗಿರಿ | ಅನುಸೂಚಿತ ಜಾತಿ | ಹಿಂದುಳಿದ ವರ್ಗ–ಬ (ಮ) |

ಅಧಿಸೂಚನೆಯನ್ನು ಪ್ರಕಟಿಸಲು ಚುನಾವಣೆಯ ನೀತಿ ಸಂಹಿತೆಯಿಂದ ವಿನಾಯತಿಯನ್ನು ಕರ್ನಾಟಕ ಮುಖ್ಯ ಚುನಾವಣಾಧಿಕಾರಿಗಳ ಪತ್ರ ಸಂಖ್ಯೆ: ಸಿಆಸುಇ 412 ಎಂಸಿಸಿ 2014, ದಿನಾಂಕ: 09.04.2014 ರಂತೆ ಪಡೆಯಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಜುಲ್ಫಿಖಾರ್ ಉಲ್ಲಾ**
ನಿರ್ದೇಶಕರು (ಪಂ.ರಾಜ್–2) ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – III | ಬೆಂಗಳೂರು, ಮಂಗಳವಾರ, ಏಪ್ರಿಲ್ ೨೨, ೨೦೧೪ (ವೈಶಾಖ ೨, ಶಕ ವರ್ಷ ೧೯೩೬) | ನಂ. ೨೭೨ |
| **Part – III** | **Bangalore, Tuesday, April 22, 2014 (Vaishakha 2, Shaka Varsha 1936)** | **No. 272** |


## KARNATAKA ELECTRICITY REGULATORY COMMISSION BANGALORE-560 001

**NOTIFICATION**

**No: Y/01/12, Bangalore, dated: 21.04.2014**

**Preamble**

KERC vide its notification dated 21.06.2013, had notified the pooled cost of power purchase under Clause 7(c) of the KERC (Procurement of Energy From Renewable Sources) (First Amendment) Regulations, 2011 at Rs.3.07/unit for 2013-14 subject to truing up as per actuals. Meanwhile, the ESCOMs have finalized their Accounts and based on the above data, the pooled cost for the year 2013-14 works out to Rs.3.14/unit.

The Commission has to notify the pooled cost of power purchase for the year 2014-15. Since it would take some time for the ESCOMs to finalize the power purchase quantum & cost for the year 2014-15, as an interim measure the Commission proposes to adopt Rs.3.14 per unit as the pooled cost for 2014-15.

**ORDER**

**In exercise of the powers conferred under Clause 7 (c) of the KERC (Procurement of Energy from Renewable Sources) (First Amendment) Regulations, 2011, for the purpose of Renewable Energy Certificate (REC), the Karnataka Electricity Regulatory Commission hereby notifies the pooled cost at Rs.3.14/unit from 01.04.2014 to 30.06.2014, or further orders whichever is earlier for the current year 2014-15. Any variation in the actual cost shall be trued up for the year 2014-15.**

**As specified in the notification-dated 21.06.2013, for the year 2013-14, the variation in the pooled cost of 7 paisa/unit [seven paisa per unit] shall be paid in the future bills in three equal installments by ESCOMs to those RE generators to the extent of energy supplied under APPC during 1st April 2013 to 31st March 2014.**

Approved by the Commission

**N. SRIRAMAN**
Secretary
Karnataka Electricity Regulatory Commission


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – III | ಬೆಂಗಳೂರು, ಶನಿವಾರ, ಏಪ್ರಿಲ್ ೨೬, ೨೦೧೪ (ವೈಶಾಖ ೬, ಶಕ ವರ್ಷ ೧೯೩೬) | ನಂ. ೨೭೯ |
| **Part – III** | **Bangalore, Saturday, April 26, 2014 (Vaishakha 6, Shaka Varsha 1936)** | **No. 279** |


## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ಅಧಿಸೂಚನೆ**

**ನಂ. ಇಎಲ್‌ಎನ್ (2) ಸಿಆರ್ 28/2013–14, ದಿನಾಂಕ : 26/04/2014**

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು 1993 ರ 12ನೇ ನಿಯಮದ ಮೇರೆಗೆ ಹೊರಡಿಸಲಾದ ಈ ಕಛೇರಿಯ ಅಧಿಸೂಚನೆ ಸಂಖ್ಯೆ : ಇಎಲ್‌ಎನ್(2)ಸಿಆರ್ 28/2013–14 ದಿನಾಂಕ : 12–02–2014 ರ ಪ್ರಕಾರ ಕೋಲಾರ ಜಿಲ್ಲೆಯಲ್ಲಿ ವಿವಿಧ ಕಾರಣಗಳಿಂದ ಖಾಲಿ ಉಳಿದಿರುವ ಸದಸ್ಯ ಸ್ಥಾನಗಳಿಗೆ ಚುನಾಯಿತ ಸದಸ್ಯರನ್ನು ತುಂಬಲು ಗ್ರಾಮ ಪಂಚಾಯ್ತಿಗಳ ಉಪ ಚುನಾವಣೆಯನ್ನು ನಡೆಸಲಾಗಿದ್ದು, ಸದರಿ ಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 5 ರ ಉಪ ಪ್ರಕರಣ 8 ರಲ್ಲಿ ಮತ್ತು ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು 1993 ರ ನಿಯಮ 76 ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೋಲಾರ ಜಿಲ್ಲೆಯ ಜಿಲ್ಲಾಧಿಕಾರಿ ಡಿ.ಕೆ.ರವಿ, ಭಾ.ಆ.ಸೇ., ಆದ ನಾನು ಗ್ರಾಮ ಪಂಚಾಯತಿಗಳಿಗೆ ಹೊಸದಾಗಿ ಆಯ್ಕೆಯಾದ ಸದಸ್ಯರುಗಳ ಹೆಸರುಗಳನ್ನು ಈ ಕೆಳಗೆ ನಮೂದಿಸಿರುವಂತೆ ಪ್ರಕಟಿಸಿರುತ್ತೇನೆ.

ತಾಲ್ಲೂಕು : ಕೋಲಾರ

| ಕ್ರ. ಸಂ. | ಗ್ರಾಮ ಪಂಚಾಯಿತಿ ಕ್ರ.ಸಂ. ಮತ್ತು ಹೆಸರು | ಕ್ಷೇತ್ರದ ಕ್ರಮ ಸಂಖ್ಯೆ ಮತ್ತು ಹೆಸರು | ಕ್ಷೇತ್ರಕ್ಕೆ ನಿಗಧಿಪಡಿಸಿದ ಸ್ಥಾನಗಳು | ಮೀಸಲಾತಿ ಸ್ಥಾನ | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ (ಶ್ರೀ/ಶ್ರೀಮತಿ) |
|---|---|---|---|---|---|
| 1 | 2 | 3 | 4 | 5 | 6 |
| 1 | 10.ಹೊನ್ನೇನಹಳ್ಳಿ | 2.ಹೊನ್ನೇನಹಳ್ಳಿ | 1(ಒಂದು) | ಪರಿಶಿಷ್ಟ ಜಾತಿ | ಶ್ರೀ.ಯಲ್ಲಪ್ಪ ಹೆಚ್.ಎಂ. ಬಿನ್ ಎಸ್.ಮುನಿಯಪ್ಪ, ಹೊನ್ನೇನಹಳ್ಳಿ, ಟಮಕ ಅಂಚೆ,ಕೋಲಾರ ತಾಲ್ಲೂಕು. |
| 2 | 32.ತೊಟ್ಲಿ | 1.ತೊಟ್ಲಿ | 1(ಒಂದು) | ಪರಿಶಿಷ್ಟ ಜಾತಿ | ಶ್ರೀ.ಟಿ.ಎಂ.ನಾರಾಯಣಸ್ವಾಮಿ ಬಿನ್ ಮುನಿಶಾಮಪ್ಪ, ತೊಟ್ಲಿ ಗ್ರಾಮ, ಕೋಲಾರ ತಾಲ್ಲೂಕು. |

ತಾಲ್ಲೂಕು : ಮಾಲೂರು

| | | | | | |
|---|---|---|---|---|---|
| 3 | 24.ಚಿಕ್ಕತಿರುಪತಿ | 1.ಚಿಕ್ಕತಿರುಪತಿ | 1(ಒಂದು) | ಹಿಂದುಳಿದ ವರ್ಗ 'ಅ' | ಶ್ರೀ.ಮಂಜುನಾಥ್ ವಿ ಬಿನ್ ಲೇಟ್ ಜಿ.ವೆಂಕಟೇಶಪ್ಪ, ಚಿಕ್ಕತಿರುಪತಿ ಗ್ರಾಮ ಮತ್ತು ಅಂಚೆ, ಮಾಲೂರು ತಾಲ್ಲೂಕು. |
| 4 | 28.ದಿನ್ನಹಳ್ಳಿ | 8.ದುಡುವನಹಳ್ಳಿ | 1(ಒಂದು) | ಪರಿಶಿಷ್ಟ ಜಾತಿ (ಮಹಿಳೆ) | ಶ್ರೀಮತಿ.ಚಿಕ್ಕತಿಮ್ಮಕ್ಕ ಕೋಂ ವೆಂಕಟೇಶಪ್ಪ, ದುಡುವನಹಳ್ಳಿ ಗ್ರಾಮ, ದಿನ್ನಹಳ್ಳಿ ಅಂಚೆ, ಮಾಲೂರು ತಾಲ್ಲೂಕು. |

ತಾಲ್ಲೂಕು : ಬಂಗಾರಪೇಟೆ

| | | | | | |
|---|---|---|---|---|---|
| 5 | 1.ಸೂಲಿಕುಂಟೆ | 5.ಸಿದ್ದನಹಳ್ಳಿ-2 | 1(ಒಂದು) | ಹಿಂದುಳಿದ ವರ್ಗ 'ಅ' | ಶ್ರೀ.ಸುರೇಶ್ ಆರ್ ಬಿನ್ ರಾಜಪ್ಪ, ಅಕ್ಷಂತರ ಗೊಲ್ಲಹಳ್ಳಿ, ಸೂಲಿಕುಂಟೆ ಅಂಚೆ, ಬಂಗಾರಪೇಟೆ ತಾಲ್ಲೂಕು. |
| 6 | 1.ಸೂಲಿಕುಂಟೆ | 5.ಸಿದ್ದನಹಳ್ಳಿ-2 | 1(ಒಂದು) | ಪರಿಶಿಷ್ಟ ಜಾತಿ | ಶ್ರೀ.ಮಂಜುನಾಥ್ ಎಸ್ ಬಿನ್ ಲೇಟ್ ಶ್ರೀನಿವಾಸ್, ಮಾದಿಗರಹಳ್ಳಿ, ಬಂಗಾರಪೇಟೆ ತಾಲ್ಲೂಕು. |
| 7 | 16.ಹುಲಿಬೆಲೆ | 7.ತೊರಗನದೊಡ್ಡಿ | 1(ಒಂದು) | ಪರಿಶಿಷ್ಟ ಜಾತಿ | ಶ್ರೀ.ಮುನಿವೆಂಕಟಪ್ಪ ಬಿನ್ ಚಿಕ್ಕನಾಸಪ್ಪ, ತೊರಗನದೊಡ್ಡಿ, ಬಂಗಾರಪೇಟೆ ತಾಲ್ಲೂಕು. |

ತಾಲ್ಲೂಕು : ಮುಳಬಾಗಿಲು

| | | | | | |
|---|---|---|---|---|---|
| 8 | 15.ಆಲಂಗೂರು | 1.ಆಲಂಗೂರು | 1(ಒಂದು) | ಪರಿಶಿಷ್ಟ ಜಾತಿ (ಮಹಿಳೆ) | ಶ್ರೀಮತಿ.ಕೃಷ್ಣಮ್ಮ ಕೋಂ ಪಿ.ಶಿವಣ್ಣ, ಆಲಂಗೂರು ಅಂಚೆ, ಮುಳಬಾಗಿಲು ತಾಲ್ಲೂಕು. |
| 9 | 28.ಅಂಗೊಂಡಹಳ್ಳಿ | 5.ಬೊಮ್ಮಸಂದ್ರ | 1(ಒಂದು) | ಸಾಮಾನ್ಯ | ಶ್ರೀ.ಬಿ.ಎಂ.ಚೆನ್ನೇಗೌಡ ಬಿನ್ ಮುನೆಪ್ಪ, ಬೊಮ್ಮಸಂದ್ರ ಗ್ರಾಮ, ಅಂಗೊಂಡಹಳ್ಳಿ ಅಂಚೆ, ಮುಳಬಾಗಿಲು ತಾಲ್ಲೂಕು. |

ತಾಲ್ಲೂಕು : ಶ್ರೀನಿವಾಸಪುರ

| | | | | | |
|---|---|---|---|---|---|
| 10 | 16.ಜೆ.ತಿಮ್ಮಸಂದ್ರ | 5.ಕಲ್ಲೂರು | 1(ಒಂದು) | ಸಾಮಾನ್ಯ | ಶ್ರೀ.ಚಂದ್ರಶೇಖರ್ ಬಿನ್ ಡಿ.ರಾಮಪ್ಪ, ಕಲ್ಲೂರು, ಜೆ.ತಿಮ್ಮಸಂದ್ರ ಪಂಚಾಯ್ತಿ, ಶ್ರೀನಿವಾಸಪುರ ತಾಲ್ಲೂಕು. |
| 11 | 20.ಚಲ್ದಿಗಾನಹಳ್ಳಿ | 8.ಕೇತಗಾನಹಳ್ಳಿ | 1(ಒಂದು) | ಪರಿಶಿಷ್ಟ ಜಾತಿ | ಶ್ರೀ.ಕದಿರಪ್ಪ ಎಂ ಬಿನ್ ಲೇಟ್ ಹನುಮಂತಪ್ಪ, ಕೇತಗಾನಹಳ್ಳಿ, ಶ್ರೀನಿವಾಸಪುರ ಅಂಚೆ ಮತ್ತು ತಾಲ್ಲೂಕು. |
| 12 | 22.ಮಾಸ್ತೇನಹಳ್ಳಿ | 1.ಮಾಸ್ತೇನಹಳ್ಳಿ | 1(ಒಂದು) | ಪರಿಶಿಷ್ಟ ಜಾತಿ (ಮಹಿಳೆ) | ಶ್ರೀಮತಿ.ಸುಮಿತ್ರ ಕೋಂ ವಿ.ರಾಮಕೃಷ್ಣಪ್ಪ, ಬಿಸನಹಳ್ಳಿ, ಶ್ರೀನಿವಾಸಪುರ ತಾಲ್ಲೂಕು. |

**ಡಿ.ಕೆ. ರವಿ**
ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ, ಕೋಲಾರ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಮಂಗಳವಾರ, ಏಪ್ರಿಲ್ ೨೯, ೨೦೧೪ (ವೈಶಾಖ ೯, ಶಕ ವರ್ಷ ೧೯೩೬) | ನಂ. ೨೮೫ |
|---|---|---|
| Part – III | Bangalore, Tuesday, April 29, 2014 (Vaishakha 9, Shaka Varsha 1936) | No. 285 |


**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು**

**ಅಧಿಸೂಚನೆ**

**ಸಂಖ್ಯೆ: ಚಿ.ಜಿ.ಕ.ಪು.ಮಾ.ಘ.ನಿ.ಸಮಿತಿ/2014–15, ದಿನಾಂಕ : 26/04/2014**

**ವಿಷಯ :** ಚಿಕ್ಕಮಗಳೂರು ಜಿಲ್ಲೆಯ ಸುರಕ್ಷಿತ ವಲಯಗಳ (ಸೇಫರ್ ಝೋನ್‌ಗಳ) ಪ್ರಕಟಿಸುವ ಬಗ್ಗೆ.

**ಉಲ್ಲೇಖ :** 1) ಕರ್ನಾಟಕ ಕಲ್ಲು ಪುಡಿ ಮಾಡುವ ಘಟಕಗಳ (ಕ್ರಷರಗಳ) ನಿಯಂತ್ರಣ ಅಧಿನಿಯಮ – 2011ರ ತಿದ್ದುಪಡಿ ಅಧಿನಿಯಮ 2013

2) ದಿನಾಂಕ 21.02.2014 ರಂದು ನಡೆದ ಜಿಲ್ಲಾ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿ ಸಭೆಯ ನಡವಳಿಗಳು.

ಚಿಕ್ಕಮಗಳೂರು ಜಿಲ್ಲೆಯ ಅಂಬಳೆ ಹೋಬಳಿ ನಾಗರಹಳ್ಳಿ ಗ್ರಾಮದ ಸರ್ವೆ ನಂಬರ್ 167 ರಲ್ಲಿನ 30 ಎಕರೆ ವಿಸ್ತೀರ್ಣದ ಪ್ರದೇಶ ಹಾಗೂ ತರೀಕೆರೆ ತಾಲೂಕು ಕಸಬಾ ಹೋಬಳಿ ಪಿರುಮೇನಹಳ್ಳಿ ಗ್ರಾಮದ ಸರ್ವೆ ನಂಬರ್ 22 ರಲ್ಲಿನ 21 ಎಕರೆ 38 ಗುಂಟೆ ಪ್ರದೇಶವನ್ನು ದಿನಾಂಕ 21.02.2014 ರಂದು ನಡೆದ ಜಿಲ್ಲಾ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿ ಸಭೆಯಲ್ಲಿ, ಜಿಲ್ಲಾ ಕಲ್ಲು ಪುಡಿ ಮಾಡುವ ಘಟಕಗಳ ನಿಯಂತ್ರಣ ಅಧಿನಿಯಮ 2011 ರ ತಿದ್ದುಪಡಿ ಅಧಿನಿಯಮ 2013 ರಂತೆ ಸುರಕ್ಷಿತ ವಲಯಗಳೆಂದು ಘೋಷಣೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ನೂತನವಾಗಿ ಕಲ್ಲು ಪುಡಿ ಮಾಡುವ ಘಟಕಗಳನ್ನು (ಕ್ರಷರ್‌ಗಳನ್ನು) ಸದರಿ ಸುರಕ್ಷಿತ ವಲಯಗಳಲ್ಲಿ ಸ್ಥಾಪಿಸಲು ಇಚ್ಛಿಸುವವರು ನಮೂನೆ–ಎ ರಲ್ಲಿ ಅರ್ಜಿಯನ್ನು ಸದಸ್ಯ ಕಾರ್ಯದರ್ಶಿಗಳಾದ ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಖನಿಜ ವಿಭಾಗ, ಚಿಕ್ಕಮಗಳೂರು ಇವರ ಕಛೇರಿಯಲ್ಲಿ ಅರ್ಜಿ ನಮೂನೆಗಳನ್ನು ಪಡೆದುಕೊಳ್ಳಲು ಸೂಚಿಸಿದೆ ಹಾಗೂ ಭರ್ತಿ ಮಾಡಿದ ಅರ್ಜಿಗಳನ್ನು ಅರ್ಜಿ ಶುಲ್ಕ (ಡಿ.ಡಿ ರೂಪದಲ್ಲಿ) ರೂ.5000/– ಗಳೊಂದಿಗೆ ಹಿರಿಯ ಭೂವಿಜ್ಞಾನಿಯವರ ಕಛೇರಿಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ನೀಡಿದ ದಿನಾಂಕದಿಂದ 30 ದಿನಗಳ ಒಳಗೆ ಸಲ್ಲಿಸಬಹುದಾಗಿದೆ. ಅನುಮೋದನೆಗೊಂಡ 2 ಸುರಕ್ಷಿತ ವಲಯಗಳ ವಿವರಗಳನ್ನು ಸಾರ್ವಜನಿಕರ ಗಮನಕ್ಕೆ ತರಲು ಈ ಪ್ರಕಟಣೆ.

**ಚಿಕ್ಕಮಗಳೂರು ಜಿಲ್ಲೆಯ ಕಲ್ಲು ಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ಅಧಿನಿಯಮ–2011 ರ ತಿದ್ದುಪಡಿ ಅಧಿನಿಯಮ 2013 ರಡಿಯಲ್ಲಿ ಅನುಮೋದಿಸಲಾದ ಸುರಕ್ಷಿತ ವಲಯಗಳ ವಿವರ**

| ಕ್ರಸಂ | ತಾಲ್ಲೂಕು | ಗ್ರಾಮದ ಹೆಸರು | ರಿ.ಸ.ನಂ | ವಿಸ್ತೀರ್ಣ |
|---|---|---|---|---|
| 1 | ಚಿಕ್ಕಮಗಳೂರು | ನಾಗರಹಳ್ಳಿ | 167 | 30 ಎಕರೆ |
| 2 | ತರೀಕೆರೆ | ಪಿರುಮೇನಹಳ್ಳಿ | 22 | 21 ಎಕರೆ 38 ಗುಂಟೆ |

ಜಿಲ್ಲಾಧಿಕಾರಿಗಳು
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ನೀಡಿರುವ ಕಾರ್ಯಾಚರಣೆಯ ಅನುಮತಿ ಪ್ರಮಾಣಪತ್ರವನ್ನು ಹಾಜರು ಪಡಿಸಿದ ಮೇಲೆ ಲೈಸೆನ್ಸಿಂಗ್ ಪ್ರಾಧಿಕಾರವು ನಿಯಮಿಸಬಹುದಾದಂತಹ ನಮೂನೆಯಲ್ಲಿ ಅರ್ಜಿದಾರನಿಗೆ ಲೈಸೆನ್ಸ್‌ಅನ್ನು ನೀಡತಕ್ಕದ್ದು. ಲೈಸೆನ್ಸುದಾರನು ಮುಂದಿನ ಷರತ್ತುಗಳಿಗೆ ಬದ್ಧನಾಗಿರತಕ್ಕದ್ದು,** ಎಂದರೆ

1. ಪ್ರತಿಯೊಂದು ಘಟಕವು ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಲಿಯು ಕಾಲಕಾಲಕ್ಕೆ ನಿಗದಿಪಡಿಸಬಹುದಾದಂತೆ ವಾಯು (ಮಾಲಿನ್ಯ ಪ್ರತಿಬಂಧ ಮತ್ತು ನಿಯಂತ್ರಣ) ಅಧಿನಿಯಮ 1981 ಮತ್ತು ಪರಿಸರ ಸಂರಕ್ಷಣೆ ಅಧಿನಿಯಮ 1986 ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಬದ್ಧವಾಗಿರತಕ್ಕದ್ದು:
2. ಪ್ರತಿಯೊಂದು ಘಟಕವು ಶಬ್ದ (ವಿನಿಯಮಗಳು ಮತ್ತು ನಿಯಂತ್ರಣ) ನಿಯಮಗಳು, 2000 ಇದಕ್ಕೆ ಅನುಸಾರವಾಗಿರತಕ್ಕದ್ದು:
3. ಕಲ್ಲು ಪುಡಿ ಮಾಡುವ ಒಂದು ಘಟಕವು (ಕ್ರಷರ್) ಅಥವಾ ಘಟಕಗಳ ಸಮೂಹವು ವಾಯು ಮಾಲಿನ್ಯ ನಿಯಂತ್ರಣ ಕ್ರಮಗಳ ಜೊತೆಗೆ, (ಸಂದರ್ಭಾನುಸಾರ, ರಾಷ್ಟ್ರೀಯ ಹೆದ್ದಾರಿ ಅಥವಾ ರಾಜ್ಯ ಹೆದ್ದಾರಿ ಅಥವಾ ಪ್ರಧಾನ ಜಿಲ್ಲಾ ರಸ್ತೆ ಅಥವಾ ಗ್ರಾಮ ವಸತಿ ಪ್ರದೇಶ ಅಥವಾ ದೇವಾಲಯ ಅಥವಾ ಶಾಲೆಗೆ ಸಮಾನಾಂತರವಾಗಿ) ಎಲ್ಲಾ ಮೂರು ಕಡೆಗಳಲ್ಲಿ 15 ರಿಂದ 20 ಅಡಿ ಎತ್ತರದ ಗೋಡೆ/ ಜಿ ಐ ಶೀಟ್ ರಕ್ಷಣೆ ಒದಗಿಸತಕ್ಕದ್ದು.
4. ಅರ್ಜಿದಾರನು,–

   (ಎ) ಆ ಸ್ಥಳದಿಂದ ಧೂಳು ಹೊರಕ್ಕೆ ಹೋಗದಂತೆ ತಡೆಗಟ್ಟಲು ದೊಡ್ಡ ಪ್ರಮಾಣದಲ್ಲಿ ಧೂಳು ಹೊರ ಹಾಕುವ ಮೂಲಗಳಿಗೆ ಕಟ್ಟಡ ಆವರಣಗಳನ್ನು ನಿರ್ಮಿಸುವಂಥ ಅವಶ್ಯವಾದ ಧೂಳು ತಡೆ ವ್ಯವಸ್ಥೆಯನ್ನು ಅಳವಡಿಸಿಕೊಳ್ಳತಕ್ಕದ್ದು.

(ಬಿ) ಬಿರುಸಾಗಿ ಬೀಸುವ ಗಾಳಿಯನ್ನು ತಡೆದುಕೊಳ್ಳುವಂತ ಆಂಗಲ್ ಸ್ಟ್ರಕ್ಚರ್‌ಗಳ ಆಸರೆಯ ಹಂದರವಿರುವ ಜಿ.ಐ ಶೀಟುಗಳ (1.66 ಮಿ.ಮೀ ಮತ್ತು 1.25 ಮಿ.ಮೀ ದಪ್ಪದ) ಜಿ.ಐ ಶೀಟ್‌ಗಳ ಆವರಣ ಬೇಲಿಯನ್ನು (enclosure) ನಿರ್ಮಿಸತಕ್ಕದ್ದು. ನೀರು ಸಂಗ್ರಹವಾಗುವುದನ್ನು ತೆಡೆಗಟ್ಟುವ ಹಾಗೆ ಇಳಿಜಾರು ಛಾವಣಿ ಅನುಕ್ರಮವಾಗಿ ನಿರ್ಮಿಸತಕ್ಕದ್ದು:

ನೀರು ಸಂಗ್ರಹವಾಗುವುದನ್ನು ತಡೆಗಟ್ಟುವ ಹಾಗೆ ಇಳಿಜಾರು ಛಾವಣಿ ಅನುಕ್ರಮವಾಗಿ ನಿರ್ಮಿಸತಕ್ಕದ್ದು.

(ಡಿ) ಪರಿಸರಕ್ಕೆ ಧೂಳು ಬಿಡುಗಡೆಯಾಗುವುದನ್ನು ತಡೆತಟ್ಟಲು ಪೂರ್ತಿಯಾಗಿ ಮುಚ್ಚುವಂಥ ಹಾಪರ್ ಬಾಟಂ/ ಉತ್ಪನ್ನವನ್ನು ಇಳಿಸುವ ಕನ್ವೇಯರ್‌ನಂಥ ಸಾಮಗ್ರಿ ವರ್ಗಾವಣೆ ತಾಣವನ್ನು ವ್ಯವಸ್ಥೆಗೊಳಿಸತಕ್ಕದ್ದು.

(ಇ) ಜಾ ಕ್ರಷರುಗಳ ಪಕ್ಕದಲ್ಲಿ ಮತ್ತು ತಳಭಾಗದಲ್ಲಿ ತೆರೆದಿರುವ ಭಾಗಗಳಲ್ಲಿ ಸಂಪೂರ್ಣವಾಗಿ ಮುಚ್ಚುವಂತಹ ಆವರಣ ಬೇಲಿ ನಿರ್ಮಿಸಲು ಸಾಧ್ಯವಿಲ್ಲದಿದ್ದಲ್ಲಿ, ಪರಿಸರಕ್ಕೆ ಧೂಳು ಬಿಡುಗಡೆಯಾಗುವುದನ್ನು ತಡೆಗಟ್ಟಲು ಅವುಗಳಿಗೆ ಜಿ.ಐ ಷೀಟ್‌ಗಳು/ ರಬ್ಬರ್ ಫ್ಲಾಪ್ ಅಥವಾ ಯಾವುದೇ ಇತರೆ ಸಾಮಗ್ರಿಯಿಂದ ಸೂಕ್ತವಾಗಿ ಮುಚ್ಚುವ ವ್ಯವಸ್ಥೆ ಮಾಡಲಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(ಎಫ್) ಎತ್ತರದಿಂದ ವಸ್ತುಗಳು ಅಡೆತಡೆಯಿಲ್ಲದೆ ಬೀಳುವಾಗ ಪರಿಸರದೊಳಗೆ ಧೂಳು ಬಿಡುಗಡೆಯಾಗುವುದನ್ನು ತಡೆಗಟ್ಟಲು ಉತ್ಪನ್ನವನ್ನು ಇಳಿಸುವ ಕನ್ವೇಯರ್‌ಗಳಲ್ಲಿ ಟೆಲಿಸ್ಕೋಪಿಕ್ ಚ್ಯೂಟ್‌ಗಳನ್ನು ಅಳವಡಿಸಲಾಗಿದೆಯೆಂದು ಖಚಿತಪಡಿಸಿಕೊಳ್ಳತಕ್ಕದ್ದು. ರಾಶಿಯ ಗಾತ್ರಕ್ಕೆ ಅನುಗುಣವಾಗಿ ಈ ಚ್ಯೂಟ್‌ಗಳನ್ನು ಉದ್ದದಲ್ಲಿ ಸರಿಹೊಂದಿಸಿಕೊಳ್ಳಬಹುದು.

(ಜಿ) ಧೂಳಿನ ಬಿಡುಗಡೆಯನ್ನು ತಡೆಗಟ್ಟಲು, ರಬ್ಬರ್ ಫ್ಲಾಪ್‌ನೊಂದಿಗೆ (ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ) ಶಾಫ್ಟರ್ ಮೋಟಾರು ಡ್ರೈವರ್ ಕನ್ವೆಯರ್ ಬೆಲ್ಟ್‌ಗಳ ಮೇಲೆ, ಮುಂತಾದ ಕಡೆಗಳಲ್ಲಿ ಆವರಣ ಬೇಲಿಯಲ್ಲಿ ತೆರೆದ ಕಿಂಡಿಗಳನ್ನು ಏರ್ಪಡಿಸತಕ್ಕದ್ದು:

(ಎಚ್) ಧೂಳಿನ ಮೋಡವನ್ನು ನಿವಾರಿಸಲು, ಧೂಳು ಉತ್ಪಾದನೆಯಾಗುವ ಮೂಲಗಳ ಮೇಲೆ ವಿಶೇಷ ನಳಿಕೆಗಳ ಮೂಲಕ ಸಣ್ಣದಾಗಿ ನೀರಿನ ತುಂತುರು ಹನಿಗಳನ್ನು ಸಿಂಪಡಿಸುವುದನ್ನು ಒಳಗೊಂಡಂತೆ ಪರಿಣಾಮಕಾರಿ ಧೂಳು ನಿವಾರಣಾ ವ್ಯವಸ್ಥೆಯನ್ನು ಕಲ್ಪಿಸತಕ್ಕದ್ದು:

(ಐ) ನೀರು ಸಿಂಪರಣೆ ನಳಿಕೆಯು ಕಟ್ಟಿಕೊಳ್ಳುವುದನ್ನು ತಡೆಗಟ್ಟಲು ಅದನ್ನು ಕಾಲಕಾಲಕ್ಕೆ ಶುಚಿಗೊಳಿಸತಕ್ಕದ್ದು:

(ಜೆ) ವೃತ್ತಿ ಸುರಕ್ಷತಾ ಕ್ರಮವಾಗಿ, ಎಲ್ಲಾ ಕೆಲಸಗಾರರಿಗೆ ಮೂಗು ಮುಚ್ಚಿಕೊಳ್ಳುವಂತಹ ಮುಸುಕುಗಳನ್ನು ಒದಗಿಸತಕ್ಕದ್ದು.

5. ಧೂಳಿನ ಕಣಗಳು ಹರಡುವುದನ್ನು ತಡೆಯಲು ಬೇವು, ಹುಣಸೆ, ಗೋಲ್ಡ್ ಮೊಹರ್, ಮುತ್ತುಗದ ಮರ, ಮುಂತಾದ ಯಾವುದೇ ಇತರ ಸ್ಥಳೀಯ ದಟ್ಟವಾದ ಎಲೆಗಳುಳ್ಳ ನಿತ್ಯಹರಿದ್ವರ್ಣ ಮರಗಳನ್ನು ಒಳಗೊಂಡ ಸಮರ್ಪಕ ಹಸಿರು ವಲಯವನ್ನು ಎಲ್ಲಾ ಕಲ್ಲು ಪುಡಿ ಮಾಡುವ ಘಟಕಗಳು(ಕ್ರಷರ್‌ಗಳು) ಬೆಳೆಸತಕ್ಕದ್ದು.

ಜಿಲ್ಲಾಧಿಕಾರಿಗಳು
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

# ವಿಶೇಷ ರಾಜ್ಯ ಪತ್ರಿಕೆ


| ಭಾಗ – III | ಬೆಂಗಳೂರು, ಸೋಮವಾರ, ಮೇ ೫, ೨೦೧೪ (ವೈಶಾಖ ೧೫, ಶಕ ವರ್ಷ ೧೯೩೬) | ನಂ. ೨೯೦ |
|---|---|---|
| Part – III | Bangalore, Monday, May 5, 2014 (Vaishakha 15, Shaka Varsha 1936) | No. 290 |


## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂ. ಗ್ರಾಅಪ 17 ಜಿಪಸ 2014, ಬೆಂಗಳೂರು, ದಿನಾಂಕ: 03-05-2014**

ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳ ಮೀಸಲಾತಿ) ನಿಯಮಗಳು, 2005 ಮತ್ತು (ತಿದ್ದುಪಡಿ) ನಿಯಮಗಳು, 2010 ರಲ್ಲಿ ನಿಗಧಿಪಡಿಸಿದ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 177(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜನವರಿ 2011 ರಲ್ಲಿ ರಚಿತವಾಗಿರುವ ಜಿಲ್ಲಾ ಪಂಚಾಯತಿಗಳ ಮೂರನೇ ಅವಧಿಗೆ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿಯನ್ನು ಅನುಸೂಚಿತ ಪಂಗಡ / ಅನುಸೂಚಿತ ಜಾತಿ / ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಹುದ್ದೆಗಳ ವಿವರಗಳನ್ನು ದಿನಾಂಕ 16.04.2014ರ ಇದೇ ಸಮಸಂಖ್ಯೆಯ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿತ್ತು ಹಾಗೂ ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂ. 41091/2012 ಮತ್ತು ಇತರೆ ರಿಟ್ ಅರ್ಜಿಗಳಲ್ಲಿ ನೀಡಿದ ನಿರ್ದೇಶನದಂತೆ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮತ್ತು ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿತ್ತು.

ವಿವಿಧ ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಸಾರ್ವಜನಿಕರು ಸಲ್ಲಿಸಿದ ಮನವಿಗಳನ್ನು ಸರ್ಕಾರವು ನಿಯಮಾನುಸಾರ ಪರಿಶೀಲಿಸಿರುತ್ತದೆ, ಅದರಂತೆ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಅನುಸೂಚಿತ ಪಂಗಡ / ಅನುಸೂಚಿತ ಜಾತಿ / ಹಿಂದುಳಿದ ವರ್ಗಗಳು ಮತ್ತು

